# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ | 496 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ್ ಅರಳಿ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 10.12.2020 |
| ಉತ್ತರಿಸುವ ಸಚಿವರು | ಮಾನ್ಯ ಮುಖ್ಯಮಂತ್ರಿಗಳು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯ ವಸತಿ ನಿಲಯಗಳಿಗೆ ಆಹಾರ ಸಾಮಗ್ರಿ ಸರಬರಾಜು ಮಾಡಲು ಕರೆಯಲಾಗಿದ್ದ ಟೆಂಡರ್ ನಲ್ಲಿ ಅವ್ಯವಹಾರ ನಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಹೌದು.<br>ಜಿಲ್ಲಾ ಮಟ್ಟದ ಆಹಾರ ಧಾನ್ಯ ಖರೀದಿ ಸಮಿತಿ, ಬೀದರ್ ಜಿಲ್ಲೆ ಇವರು ನೀಡಿದ ಸರಬರಾಜು ಆದೇಶದ ವಿರುದ್ಧ ಕರ್ನಾಟಕ ರಾಜ್ಯ ಸಹಕಾರ ಗ್ರಾಹಕರ ಒಕ್ಕೂಟ ನಿಗಮ ನಿಯಮಿತ, ನಂ.4, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು ಮತ್ತು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತ ಮಹಿಳೆಯರ ವಿವಿದ್ದೋದ್ದೇಶ ಕೋ-ಅಪರೇಟಿವ್ ಸೊಸೈಟಿ, ಲಿಮಿಟೆಡ್ , ಕಲಬುರ್ಗಿ ಜಿಲ್ಲೆ, ಕಲಬುರ್ಗಿ ಇವರು ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿದ್ದು, ಕರ್ನಾಟಕ ಸಾರ್ವಜನಿಕ ಸಂಗ್ರಾಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ಸೆಕ್ಷನ್ 16(1) ರಡಿ ಸಲ್ಲಿಸಿದ ಮೇಲ್ಮನವಿಯನ್ನು ವಿಚಾರಣೆ ನಡೆಸಿ, ಹೊಸದಾಗಿ ಟೆಂಡರ್ ಕರೆಯಲು ದಿನಾಂಕ 20.10.2020 ರಲ್ಲಿ ಆದೇಶಿಸಲಾಗಿದೆ. |
| ಆ) | ಗುತ್ತಿಗೆದಾರರಿಂದ ಕಳೆದ 3 ವರ್ಷಗಳ ಜಿ.ಎಸ್.ಟಿ ಹಣ ಬಾಕಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸದರಿ ಹಣ ಪಾವತಿಯಾಗಿದೆಯೇ; ಆಗದಿದ್ದಲ್ಲಿ, ಗುತ್ತಿಗೆದಾರರ ವಿರುದ್ಧ ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಇಲ್ಲ.<br>ಆದರೆ, ಮೆ:ಬಸವೇಶ್ವರ ಎಂಟರ್ ಪ್ರೈಸಸ್, ಬೀದರ್ ಇವರು 2017-18, 2018-19 ಹಾಗೂ 2019-20ನೇ ಸಾಲಿನವರೆಗೆ ಇಲಾಖಾ ವಿದ್ಯಾರ್ಥಿನಿಲಯಗಳಿಗೆ ಆಹಾರ ಸಾಮಗ್ರಿಗಳನ್ನು ಪೂರೈಕೆ ಮಾಡಿದ್ದು, ಸದರಿ ಸಂಸ್ಥೆಯವರು ಟೆಂಡರ್ ನಿಬಂಧನೆಗಳು ಉಲಂಘಿಸಿರುವುದಾಗಿ ದೂರುಗಳು ಬಂದಿದ್ದು, ಸದರಿ ದೂರುಗಳನ್ನು ಪರಿಶೀಲಿಸಲು ಸಂಸ್ಥೆಯವರು ಹಾಗೂ ಈ ಹಿಂದಿನ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಬೀದರ್ ಇವರಿಗೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತಿ, ಬೀದರ್ ರವರು ಇತ್ತೀಚೆಗೆ ನೋಟೀಸ್ ಜಾರಿ ಮಾಡಿರುತ್ತಾರೆ. |

...2

| | | |
|---|---|---|
| | | ಟೆಂಡರ್ ನಿಯಮಗಳನ್ನು ಉಲಂಘಿಸಿದ್ದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತಿ, ಬೀದರ್ ಇವರ ವರದಿ ಬಂದ ಮೇಲೆ ಹಣ ವಸೂಲಿ ಮಾಡಲು ಕಾನೂನು ಕ್ರಮ ಜರುಗಿಸಿ ಸಂಸ್ಥೆಯನ್ನು ಕಪ್ಪು ಪಟ್ಟಿಗೆ ಸೇರಿಸುವ ಸಂಬಂಧ, ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಈ ಬಗ್ಗೆ ನಿಯಮಾನುಸಾರ ಮುಂದಿನ ಕ್ರಮ ಕೈಗೊಳ್ಳಲು ಸೂಚಿಸಲಾಗಿದೆ. |

**ಸಂಖ್ಯೆ:ಹಿಂವಕ 613 ಬಿಎಂಎಸ್ 2020**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ